# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | :: | 2092 |
| ಸದಸ್ಯರ ಹೆಸರು | :: | ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | :: | 24.03.2021 |
| ಉತ್ತರಿಸುವ ಸಚಿವರು | :: | ಪಶುಸಂಗೋಪನೆ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | KVAFSU ವಿಶ್ವವಿದ್ಯಾಲಯ ಬೀದರ್ ಅಧೀನದಲ್ಲಿರುವ ಮೀನುಗಾರಿಕೆ ಕಾಲೇಜಿನಲ್ಲಿ ಅನುಷ್ಠಾನ ಮಾಡಲಾಗುತ್ತಿರುವ A.I.C.R.P (All India Co-ordinated Research Project) ಯೋಜನೆಗೆ 75% ಅನುದಾನ ಧನಸಹಾಯ ಸಂಸ್ಥೆಯಿಂದ ಹಾಗೂ 25% ಅನುದಾನ ರಾಜ್ಯ ಸರ್ಕಾರದಿಂದ ನೀಡುತ್ತಿರುವುದು ಸರ್ಕಾರದ ಗಮನದಲ್ಲಿಯೇ; | ಹೌದು |
| ಆ) | ಈ ಯೋಜನೆಗೆ Contractual Co-Terminus ಆಧಾರದ ಮೇಲೆ ನೇಮಕಗೊಂಡ ಸಿಬ್ಬಂದಿಗಳಿಗೆ ಸರ್ಕಾರದ ಸೇವಾ ನಿಯಮಾವಳಿಯಲ್ಲಿ ವೇತನ ಶ್ರೇಣಿ, ವಾರ್ಷಿಕ ವೇತನ ನೀಡಲು ಅವಕಾಶವಿದೆಯೇ; ಈ ಬಗ್ಗೆ ಆರ್ಥಿಕ ಇಲಾಖೆಯಿಂದ ಒಪ್ಪಿಗೆ ಪಡೆಯಲಾಗಿದೆಯೇ; (ದಾಖಲೆ ಪ್ರತಿ ಒದಗಿಸುವುದು) | ICAR, ಭಾರತ ಸರ್ಕಾರ ಮತ್ತು KVAFSU ನಡುವಿನ ಒಪ್ಪಂದದ ಮಾರ್ಗಸೂಚಿಗಳ, ಮಾನದಂಡಗಳ ಪ್ರಕಾರ ಯೋಜನೆಯಡಿಯಲ್ಲಿ ನೇಮಕಗೊಂಡ ಸಿಬ್ಬಂದಿಗೆ ವೇತನ ಮತ್ತು ಭತ್ಯೆಗಳನ್ನು ವಿಶ್ವವಿದ್ಯಾಲಯದಿಂದ ಒದಗಿಸಲಾಗಿದೆ ಎಂದು ಕುಲಸಚಿವರು ವರದಿಸಿದ್ದು, ಈ ವಿಷಯವು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |
| ಇ) | 2010ನೇ ಸಾಲಿನಿಂದ ಇಲ್ಲಿಯವರೆವಿಗೂ ಸರ್ಕಾರದ ಸೇವಾ ನಿಯಮಾವಳಿಯಲ್ಲಿ ಅವಕಾಶ ಇಲ್ಲದಿದ್ದರೂ ಸಹ ಸರ್ಕಾರದ ಗಮನಕ್ಕೆ ತರದೇ ನಿಯಮಬಾಹಿರವಾಗಿ ವೇತನ ಶ್ರೇಣಿ, ವಾರ್ಷಿಕ ವೇತನ ನೀಡಿ, ರಾಜ್ಯ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವವರ ಮೇಲೆ ಯಾವ ಕ್ರಮ ತೆಗೆದುಕೊಳ್ಳಲಾಗಿದೆ; | |

| | | |
|---|---|---|
| ಈ) | ಈ ಯೋಜನೆಯ ಸಂಬಂಧ ದೂರುಗಳು ಸಲ್ಲಿಕೆಯಾಗುತ್ತಿರುವ ಕಾರಣ ಯೋಜನೆಯನ್ನು ನಿಲ್ಲಿಸಲು ಧನಸಹಾಯ ಸಂಸ್ಥೆಗೆ ಕೋರಿಕೆ ಸಲ್ಲಿಸದಿರುವುದು (ಸಂಬಂಧಿಸಿದ ಎಲ್ಲಾ ಪತ್ರ ವ್ಯವಹಾರದ ಪ್ರತಿಗಳನ್ನು ಒದಗಿಸುವುದು) ಸರ್ಕಾರದ ಗಮನಕ್ಕೆ ಬಂದಿದೆಯೇ; ಇದ್ದಲ್ಲಿ, ಯಾವ ಕಾಲಮಿತಿಯೊಳಗೆ ಸರಿಪಡಿಸಲಾಗುವುದು. | ಸದರಿ ಯೋಜನೆಯ ಕಾರ್ಯ ವೈಖರಿಯು ICAR, ಭಾರತ ಸರ್ಕಾರ ಹಾಗೂ ಕೇಂದ್ರ ಸರ್ಕಾರದ ನೋಡಲ್ ಏಜೆನ್ಸಿಯಾದ CIPHET ಅಡಿಯಲ್ಲಿ ಪ್ರತಿ ವರ್ಷವೂ ಪರಿಶೀಲನೆಗೊಳಪಟ್ಟು ನಿರಂತರ ಸೂತ್ರದಲ್ಲಿ ವಿಶ್ವವಿದ್ಯಾಲಯದ ನಿಯಮಗಳನ್ನು ಪಾಲಿಸಿ ನಡೆಸಲಾಗುತ್ತಿದೆ. ಯೋಜನೆಯ ಕಾರ್ಯವೈಖರಿಯ ಬಗ್ಗೆ ಯಾವುದೇ ದೂರುಗಳು ಬಂದಿಲ್ಲ. ಇಲ್ಲಿಯವರೆಗೆ ಸ್ಪಷ್ಟೀಕರಣಗಳನ್ನು ಮಾತ್ರ ಕೋರಲಾಗಿದೆ.<br><br>ವಿಶ್ವವಿದ್ಯಾಲಯವು ಯೋಜನೆಯ ಧನಸಹಾಯ ಸಂಸ್ಥೆ ICAR-CIPHET, ಭಾರತ ಸರ್ಕಾರಕ್ಕೆ ICAR-CIPHET ಮೀನುಗಾರಿಕಾ ಕಾಲೇಜು ಮಂಗಳೂರಿನಲ್ಲಿ ಪ್ರಧಾನ ಸಂಶೋಧಕರು ಈಗ ನಿವೃತ್ತರಾಗಿದ್ದು ಹಾಗೂ ಸೂಕ್ತ ಸಿಬ್ಬಂದಿಗಳ ಕೊರತೆ ಇರುವುದರಿಂದ ಯೋಜನೆಯನ್ನು ನಿಲ್ಲಿಸಲು ಧನಸಹಾಯ ಸಂಸ್ಥೆಗೆ ಕೋರಿಕೆ ಸಲ್ಲಿಸಿತ್ತು.<br><br>ನಂತರದಲ್ಲಿ ವಿಶ್ವವಿದ್ಯಾಲಯವು ಆಗಸ್ಟ್ 2020 ರಿಂದ ಹೊಸ ಪ್ರಧಾನ ಸಂಶೋಧಕರನ್ನು ನೇಮಿಸಿದ್ದು, AICRP ಮಂಗಳೂರಿನ ಉಸ್ತುವಾರಿ ವಹಿಸಿಕೊಂಡಿದ್ದಾರೆ ಹಾಗೂ ಯೋಜನೆಯು ಉತ್ತಮ ರೀತಿಯಲ್ಲಿ ಪ್ರಗತಿಯಲ್ಲಿದೆ. ಕೋವಿಡ್ ಸಮಯದಲ್ಲಿಯೂ ಸಹ ಯೋಜನೆಯ ಪ್ರಗತಿಯನ್ನು ಸಾಧಿಸಿರುವುದರಿಂದ ICAR-CIPHET ಭಾರತ ಸರ್ಕಾರ ಸಂಸ್ಥೆಯು ಪ್ರಶಂಸೆಯನ್ನು ವ್ಯಕ್ತಪಡಿಸಿರುತ್ತದೆ. ಯೋಜನೆಗೆ ನಿಧಿಯನ್ನು ಪೂರೈಸುತ್ತಿರುವ ICAR-CIPHET ಭಾರತ ಸರ್ಕಾರ ಸಂಸ್ಥೆಯು ಮಂಗಳೂರು ಕಾಲೇಜಿನ ಪ್ರಗತಿಯ ಬಗ್ಗೆ ಶ್ಲಾಘನೀಯ ನಿಲುವು ಹಾಗೂ ತೃಪ್ತಿಕರವಾಗಿದೆ ಎಂದು ತಿಳಿಸಿರುವುದರಿಂದ ಯೋಜನೆಯ ಬಗ್ಗೆ ಯಾವುದೇ ರೀತಿಯ ಆಕ್ಷೇಪವಿರುವುದಿಲ್ಲವೆಂದು ಕುಲಸಚಿವರು ವರದಿಸಿದ್ದು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |

| | | |
|---|---|---|
| ಉ) | ಕಾಲೇಜಿನಲ್ಲಿ ಖಾಯಂ ಸಹಾಯಕ ಪ್ರಾಧ್ಯಾಪಕ / ನೌಕರರು ಇದ್ದರೂ ಸಹ ಯೋಜನೆಯ ಎಂ.ಓ.ಯು ನಂತೆ ಖಾಯಂ ಸಿಬ್ಬಂದಿಯನ್ನು ನಿಯೋಜಿಸಿಕೊಳ್ಳದೆ Contractual Co-terminus ಆಧಾರದ ಮೇಲೆ Senior Scientist ನೇಮಕ ಮಾಡಿಕೊಳ್ಳಲು ಕಾರಣವೇನು; | ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಬೀದರ್ ಇಲ್ಲಿ ಸುಮಾರು 10 ವರ್ಷಗಳಿಂದಲೂ ನೇಮಕಾತಿ ಪ್ರಕ್ರಿಯೆ ನಡೆದಿರುವುದಿಲ್ಲವಾದ್ದರಿಂದ ಮೀನುಗಾರಿಕೆ ಮಹಾವಿದ್ಯಾಲಯ, ಮಂಗಳೂರಿಗೆ ಸಮರ್ಪಕ ಸಿಬ್ಬಂದಿ ಒದಗಿಸಲು ಸಾಧ್ಯವಾಗಿರುವುದಿಲ್ಲ. ಮೀನುಗಾರಿಕಾ ಕಾಲೇಜು ಎಲ್ಲಾ ವಿಭಾಗಗಳಲ್ಲಿ ಸಿಬ್ಬಂದಿ ಕೊರತೆಯನ್ನು ಎದುರಿಸುತ್ತಿದೆ. ಆದ್ದರಿಂದ AICRP ಯೋಜನೆಗೆ ಕೋ-ಟರ್ಮಿನಸ್ ಆಧಾರದಲ್ಲಿ ತಾತ್ಕಾಲಿಕ ಸಿಬ್ಬಂದಿಯನ್ನು ನೇಮಕ ಮಾಡಲಾಗಿದೆ ಎಂದು ಕುಲಸಚಿವರು ವರದಿಸಿದ್ದು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |
| ಊ) | ಸದರಿ ಯೋಜನೆಯು ಎಂ.ಓ.ಯು. ನಂತೆ 1 ವರ್ಷದೊಳಗೆ ಖಾಯಂ ಸಿಬ್ಬಂದಿಯನ್ನು ನೇಮಿಸಿಕೊಳ್ಳಬೇಕಾಗಿದ್ದು, 10 ವರ್ಷ ಕಳೆದರೂ ಸಹ ಖಾಯಂ ಸಿಬ್ಬಂದಿಯನ್ನು ನೇಮಿಸಿಕೊಂಡಿಲ್ಲದಿರುವುದಕ್ಕೆ ಕಾರಣಗಳೇನು?(ವಿವರ ನೀಡುವುದು) | |

ಸಂಖ್ಯೆ: ಪಸಂಮೀ ಇ-61 ಪಅಸೇ 2021

**(ಪ್ರಭು ಬಿ. ಚವ್ಹಾಣ್)**
ಪಶುಸಂಗೋಪನೆ ಸಚಿವರು